ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಮಹಿಳಾ ಕಾರ್ಮಿಕರಿಗೆ ಮೆಡಿಕಲ್ ಬೋನಸ್ ನೀಡುವ ಬಗ್ಗೆ

ಶ್ರೀ ಮಾನೆ ಶ್ರೀನಿವಾಸ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

730 (765) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಹೊರಗುತ್ತಿಗೆ ಮಹಿಳಾ ಪೌರ ಕಾರ್ಮಿಕರಿಗೆ ತಲಾ ರೂ. 2,500/-ರಂತೆ ಕಲಂ 08ರ ಪ್ರಕಾರ ಮೆಡಿಕಲ್ ಬೋನಸ್ ಮೊತ್ತವನ್ನು ಪಾವತಿಸುವ ಯೋಜನೆ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಹೊರಗುತ್ತಿಗೆ ಮೇಲೆ ಕೆಲಸ ಮಾಡುತ್ತಿರುವ ಎಷ್ಟು ಹೊರಗುತ್ತಿಗೆ ಮಹಿಳಾ ಪೌರ ಕಾರ್ಮಿಕರಿಗೆ ಹೆರಿಗೆ ಸೌಲಭ್ಯಗಳ ಕಾಯ್ದೆ, 1961ರನ್ವಯ ಯಾವ ಯಾವ ಸಾಲಿನಲ್ಲಿ ಎಷ್ಟು ಮೆಡಿಕಲ್ ಸಂದಾಯ ಮಾಡಲಾಗಿದೆ;

(ಇ) ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಹೊರಗುತ್ತಿಗೆ ಮೇಲೆ ಕೆಲಸ ಮಾಡುತ್ತಿರುವ ಎಷ್ಟು ಹೊರಗುತ್ತಿಗೆ ಮಹಿಳಾ ಪೌರ ಕಾರ್ಮಿಕರಿಗೆ ಹೆರಿಗೆ ಸೌಲಭ್ಯಗಳ ಕಾಯ್ದೆ, 1961ರನ್ವಯ ಸಂದಾಯವಾಗದೇ ಬಾಕಿ ಉಳಿದಿರುವುದಕ್ಕೆ ಕಾರಣಗಳೇನು;

(ಈ) ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಹೊರಗುತ್ತಿಗೆಯಲ್ಲಿ ಕೆಲಸ ಮಾಡುತ್ತಿರುವ ಎಷ್ಟು ಮಹಿಳಾ ಪೌರ ಕಾರ್ಮಿಕರಿಗೆ ಹೆರಿಗೆ ಸೌಲಭ್ಯಗಳ ಕಾಯ್ದೆ, 1961ರನ್ವಯ ಬಾಕಿ ಉಳಿದಿರುವ ಸೌಲಭ್ಯಗಳನ್ನು ಪೂರೈಸಲಾಗುವುದು ಯಾವಾಗ?